ನಾಮೆಯನ್ನು ಸಹಿ ಮಾಡತಕ್ಕದ್ದು, ಈ ಅವಧಿಯನ್ನು ವಿಸ್ತರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಸಾಮಾಜಿಕ ಅರಣ್ಯ ವಿಭಾಗ ರಾಮನಗರ ಇವರು ಹೊಂದಿರುತ್ತಾರೆ.

11. ಈ ಮೇಲಿನ ಕಾಮಗಾರಿಗಳ ಅನುಷ್ಠಾನ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ವಾರ್ಷಿಕ ಕ್ರಿಯಾಯೋಜನೆಯ ಅನುಮೋದನೆ ನಿಬಂಧನೆಗೆ ಒಳಪಟ್ಟಿರುತ್ತದೆ. ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗಾಗಿ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.
12. ಎಲ್ಲಾ ಕೆಲಸಗಳು ಆಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ನಿಯಮದಂತೆ ಸಂಬಂಧಿಸಿದ ಅಧಿಕಾರಿಗಳಿಂದ ತನಿಖೆ ಮಾಡಿಸಿ ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಅಳತೆ ಪುಸ್ತಕದೊಂದಿಗೆ (ಎಂಬಿ/ಎಫ್.ಎನ್.ಬಿ) ಒಪ್ಪಿಸಬೇಕಾಗುತ್ತದೆ ಮತ್ತು ಬಿಲ್ ಸಂದಾಯ ಮಾಡುವಾಗ ಸದರಿ ಬಿಲ್ಲುಗಳಲ್ಲಿ ನಿಯಮದಂತೆ ಚಾಲ್ತಿಯಲ್ಲಿರುವ ಆದಾಯ ತೆರಿಗೆ, ಮಾರಾಟ ತೆರಿಗೆ, ಸರ್ಚಾರ್ಜ್ ಮತ್ತು ಭದ್ರತಾ ಠೇವಣಿ ಹಣವನ್ನು ಕಡಿತಗೊಳಿಸಲಾಗುವುದು ಮತ್ತು ಆಗಿಂದಾಗ್ಗೆ ಬದಲಾಗುವ ತೆರಿಗೆಗಳ ವ್ಯತ್ಯಾಸವನ್ನು ಸಹ ನಿಯಮದಂತೆ ಕಡಿತಗೊಳಿಸಲಾಗುವುದು.
13. ಕೆಲಸಗಳನ್ನು ನಿರ್ವಹಿಸುವಾಗ ಇತರೆ ನೆಡುತೋಪುಗಳನ್ನು ಹಾಳು ಮಾಡಿದಲ್ಲಿ ಗಿಡ ಮರಗಳನ್ನು ಕಡಿದು ನಾಶಪಡಿಸಿದಲ್ಲಿ ಸರ್ಕಾರಕ್ಕೆ ಆದ ನಷ್ಟದ ಬಗ್ಗೆ ಸಂಬಂಧಪಟ್ಟ ಗುತ್ತಿಗೆದಾರರ ಮೇಲೆ ಕಾನೂನಿನ ಕ್ರಮ ಜರುಗಿಸಲಾಗುವುದು.
14. ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
15. ಯಾವುದೇ ವಿಭಾಗದಲ್ಲಿ ಗುತ್ತಿಗೆದಾರರು ಡಿಫಾಲ್ಟರ್ ಆಗಿದ್ದರೆ ಅಂತಹವರು ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ.
16. ಗುತ್ತಿಗೆದಾರರು ನೇಮಿಸಿಕೊಳ್ಳುವ ಕೆಲಸಗಾರರಿಗೆ ಸರ್ಕಾರದ ನಿಯಮದಂತೆ ಮಜೂರಿ ಮತ್ತಿತರ ಅನುಕೂಲಗಳನ್ನು ಸ್ವತಃ ಗುತ್ತಿಗೆದಾರರೇ ವಹಿಸಬೇಕು. ಇಲಾಖೆಯು ಗುತ್ತಿಗೆದಾರರ ಮತ್ತು ಅವರ ನೌಕರರಿಗೆ ಯಾವುದೇ ಆದ ನಷ್ಟ ಇತ್ಯಾದಿಗಳಿಗೆ ಜವಾಬ್ದಾರರಲ್ಲ.
17. ಟೆಂಡರ್‌ನಲ್ಲಿ ನಮೂದಿಸಿದ ಹಣವು ಅಂದಾಜು ಪಟ್ಟಿಗಳ ಅಂದಾಜು ದರವಾಗಿರುತ್ತದೆ.(ಅಪ್ರಾಕ್ಸಿಮೇಟ್) ಹಣವನ್ನು ಪಾವತಿಸುವಾಗ ಮಂಜೂರಾದ ಅಂದಾಜು ಪಟ್ಟಿಯಂತೆ ಹಣ ಪಾವತಿಸಲಾಗುವುದು.
18. ಕಾಮಗಾರಿಯನ್ನು ಅರಣ್ಯ ಇಲಾಖೆಯಿಂದ ಪರಿಶೀಲಿಸಿ ಮಂಜೂರಾದ ಅಂದಾಜು ಪಟ್ಟಿಯ ಅನುಗುಣವಾಗಿ ಮಾಡಬೇಕಾಗಿರುತ್ತದೆ. ಕಾಮಗಾರಿಯ ಗುಣಮಟ್ಟವು ವಲಯ ಅರಣ್ಯಾಧಿಕಾರಿ, ಸಹಾಯಕ ಅರಣ್ಯಾಧಿಕಾರಿಗಳು ಇವರು ಕಾಲಕಾಲಕ್ಕೆ ನೀಡುವ ಲಿಖಿತ/ಮೌಖಿಕ ಆದೇಶಕ್ಕನುಗುಣವಾಗಿ ಇರತಕ್ಕದ್ದು. ಕೆಲಸಗಳಲ್ಲಿ ಏನಾದರೂ ಪರಿವರ್ತನೆ ಅಥವಾ ಮಾರ್ಪಾಡು ಮಾಡುವುದು ಅವಶ್ಯವೆಂದು ಕಂಡುಬಂದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಲಿಖಿತ ಆದೇಶದ ಮೇರೆಗೆ ಅಂತಹ ಪರಿವರ್ತನೆ ಅಥವಾ ಮಾರ್ಪಾಡುಗಳನ್ನು ಮಂಜೂರಾದ ದರದಲ್ಲಿಯೇ ಮಾಡಲು ಗುತ್ತಿಗೆದಾರರು ಬದ್ಧರಾಗಿರಬೇಕಾಗಿರುತ್ತದೆ.
19. ವಲಯ ಅರಣ್ಯಾಧಿಕಾರಿ ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ನಿರ್ದೇಶನದಂತೆ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು. ಗುತ್ತಿಗೆ ಅವಧಿಯನ್ನು ಸಾಮಾನ್ಯವಾಗಿ ವಿಸ್ತರಿಸಲಾಗುವುದಿಲ್ಲ. ನಿಗದಿತ ಅವಧಿಯಲ್ಲಿ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು, ಅತೀ ವಿಶೇಷ ಸಂದರ್ಭಗಳು ಬಂದಲ್ಲಿ ವಿಸ್ತರಣಾ ಅವಧಿಯಲ್ಲಿ ಮಾಡಿದ ಕೆಲಸಗಳಿಗೆ ಗುತ್ತಿಗೆ ದರಗಳಲ್ಲಿ ಶೇ 5 ರಂತೆ ಕಡಿತದೊಂದಿಗೆ ಅವಧಿಯನ್ನು ವಿಸ್ತರಿಸುವ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಹೊಂದಿರುತ್ತಾರೆ. ವಲಯ ಅರಣ್ಯಾಧಿಕಾರಿ ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರು ನೀಡಿದ ನಿರ್ದೇಶನದಂತೆ ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸದಿದ್ದಲ್ಲಿ ಅಂತಹ ಕಾಮಗಾರಿಗಳಿಗೆ ಹಣವನ್ನು ಪಾವತಿಸಲಾಗುವುದಿಲ್ಲ ಮತ್ತು ಇಎಂಡಿ ಹಾಗೂ ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
20. ಟೆಂಡರನ್ನು ಕಂಪನಿವತಿಯಿಂದ / ಸಂಘಸಂಸ್ಥೆಗಳು ಕೊಡುವ ಪಕ್ಷದಲ್ಲಿ

    ಅ) ಕಂಪನಿಯ/ಸಂಘಸಂಸ್ಥೆಗಳು ನೊಂದಾಯಿತ ಸಂಸ್ಥೆಗಳಾಗಿರಬೇಕು.

    ಆ) ಕಂಪನಿಯ ಎಲ್ಲಾ ಪಾಲುದಾರರಿಗೆ ಟೆಂಡರ್‌ನ್ನು ಸಹಿ ಮಾಡಲು ಸಾಧ್ಯವಾಗದಿದ್ದಲ್ಲಿ ಟೆಂಡರ್ ಸಹಿ ಮಾಡುವ ವ್ಯಕ್ತಿಯು ಈ ಬಗ್ಗೆ ಅಧಿಕಾರ ಪತ್ರ (power of Attorney) ಪಡೆದುಕೊಂಡಿರಬೇಕು. ಇಂತಹ ಪತ್ರವನ್ನು ಟೆಂಡರ್‌ಗೆ ಲಗತ್ತಿಸಬೇಕು.

21. ಅರಣ್ಯ ಕೂಲಿಕಾರರ ಸಹಕಾರ ಸಂಘಗಳು ಈ ಕೆಲಸಗಳಿಗೆ ಟೆಂಡರ್ ಕೊಡಲು ಇಚ್ಚಿಸಿದಲ್ಲಿ ಇಎಂಡಿ ಮತ್ತು ಭದ್ರತಾ ಠೇವಣಿಯನ್ನು ಕಡ್ಡಾಯವಾಗಿ ನೀಡಬೇಕಾಗುವುದು ಹಾಗೂ ಸಂಘಗಳ ನೊಂದಣಿ ನಿಯಮದಂತೆ ಸಂಘಗಳೂ ಕಡ್ಡಾಯವಾಗಿ ನೊಂದಣಿಯಾಗಿರಬೇಕು. ಇಲ್ಲವಾದಲ್ಲಿ ಟೆಂಡರ್‌ನ್ನು ತಿರಸ್ಕರಿಸಲಾಗುವುದು.
22. ಯಶಸ್ವಿ ಟೆಂಡರ್‌ದಾರರು ಕರಾರು ನಾಮೆಯನ್ನು ಸಹಿ ಮಾಡಿದ ನಂತರ ಟೆಂಡರ್‌ನ್ನು ಹಿಂತೆಗೆದುಕೊಂಡಲ್ಲಿ ನಿಗದಿತ ಸಮಯದಲ್ಲಿ ಕಾಮಗಾರಿ ಪ್ರಾರಂಭಿಸದಿದ್ದಲ್ಲಿ, ಕಾಮಗಾರಿಯ ಬಗ್ಗೆ ನಿರಾಸಕ್ತಿ ಹೊಂದಿದಲ್ಲಿ ಟೆಂಡರ್‌ದಾರರ ಇಎಂಡಿ ಮತ್ತು ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೇ ಗುತ್ತಿಗೆ ಕೆಲಸವನ್ನು ಮೂಲ ಗುತ್ತಿಗೆದಾರರ ಖರ್ಚು ಮತ್ತು ಜವಾಬ್ದಾರಿಯ ಮೇಲೆ ಮರು ಟೆಂಡರ್ ಮಾಡಲಾಗುವುದು. ಟೆಂಡರ್‌ಗೆ ಕಾಲಾವಕಾಶವಿಲ್ಲದಿದ್ದಲ್ಲಿ ಇಲಾಖೆಯಿಂದ ಕಾಮಗಾರಿಯನ್ನು ಪೂರ್ಣಗೊಳಿಸಿ ಸರ್ಕಾರಕ್ಕೆ ಹಾನಿಯಾದ ಮೊತ್ತವನ್ನು ಕರ್ನಾಟಕ ಅರಣ್ಯ ಸಂಹಿತೆ 1963 ಕಾಲಂ 109 ಮತ್ತು 119 ರಂತೆ ಭೂಕಂದಾಯ ಬಾಕಿ ವಸೂಲು ಮಾಡಲಾಗುವುದು.
23. ಯಶಸ್ವಿ ಬಿಡ್ಡುದಾರರು ಕಾಮಗಾರಿಗಳನ್ನು ಪೂರ್ಣಗೊಳಿಸಿದ ನಂತರ ಹಣ ಪಾವತಿಸುವಾಗ ಬಿಲ್ಲಿನ ಮೊತ್ತದ ಶೇ 5 ರಷ್ಟು ಮೊತ್ತವನ್ನು ಭದ್ರತಾ ಠೇವಣಿಯಾಗಿ ಹಿಡಿಯಲಾಗುವುದು. ಈ ಹಣವನ್ನು ನೆಡುತೋಪು ನಿರ್ಮಾಣ ಬಗ್ಗೆ ವಲಯ ಅರಣ್ಯಾಧಿಕಾರಿಗಳು ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ದೃಢೀಕರಣ ಪತ್ರ ನೀಡಿದ ನಂತರ ಭದ್ರತಾ ಠೇವಣಿ ಮೊತ್ತವನ್ನು ಹಿಂದಿರುಗಿಸಲಾಗುವುದು.
24. ಕೆಲಸ ಪೂರ್ಣಗೊಂಡ ದಿನಾಂಕದಿಂದ 1 ವರ್ಷದ ಒಳಗಾಗಿ ಕಾಮಗಾರಿಯಲ್ಲಿ ಯಾವುದೇ ದೋಷ ಕಂಡುಬಂದಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಲ್ಲಿ ದೋಷ ಪರಿಹರಿಸಬೇಕಾಗುತ್ತದೆ. ನಂತರ ಭದ್ರತಾ ಠೇವಣಿ ಹಿಂತಿರುಗಿಸಲಾಗುವುದು. ತಪ್ಪಿದ್ದಲ್ಲಿ ಭದ್ರತಾ ಠೇವಣಿಯಲ್ಲಿ ಸದರಿ ಖರ್ಚನ್ನು ಭರಿಸಲಾಗುವುದು.
25. ಗುತ್ತಿಗೆದಾರರು ನೇಮಿಸಿಕೊಂಡಿರುವ ಕೂಲಿ ಕಾರ್ಮಿಕರಿಗೆ ಅಪಘಾತ/ಇನ್ನಿತರ ಹಾನಿಗಳು ಸಂಭವಿಸಿದಲ್ಲಿ ನಷ್ಟ ಪರಿಹಾರವನ್ನು ಗುತ್ತಿಗೆದಾರರೇ ನೀಡಬೇಕಾಗುತ್ತದೆ.
26. ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಲಿಖಿತ ಅನುಮತಿ ಇಲ್ಲದೆ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.
27. ಟೆಂಡರ್ ಫಾರಂ ನೀಡುವ ದಿನಗಳಲ್ಲಿ ಗುತ್ತಿಗೆದಾರರ ನೊಂದಣಿಯನ್ನು ಮಾಡಲಾಗುವುದಿಲ್ಲ.
28. ಕಾಲ ಕಾಲಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಮಾಜಿಕ ಅರಣ್ಯ ವಿಭಾಗ ರಾಮನಗರ ಇವರು ವಿಧಿಸುವ ಷರತ್ತಿಗೆ ಗುತ್ತಿಗೆದಾರರು ಬದ್ಧರಾಗಿರಬೇಕು.

ಉಪ ಅರಣ್ಯ ಸಂರಕ್ಷಣಾಧಿಕಾರಿ
ಪಿ.ಆರ್. 693 ಸಾಮಾಜಿಕ ಅರಣ್ಯ ವಿಭಾಗ, ರಾಮನಗರ.

## ನೇಮಕಾತಿ ಪ್ರಕಟಣೆ

## ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯ, ಹಾಸನ

### ಅಧಿಸೂಚನೆ ಸಂಖ್ಯೆ 7/2009, ದಿನಾಂಕ: 17ನೇ ಆಗಸ್ಟ್ 2009

**ವಿಷಯ:** ಹಾಸನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯ ಘಟಕದ ಅರಕಲಗೂಡಿನ ತ್ವರಿತ ವಿಲೇವಾರಿ ನ್ಯಾಯಾಲಯದಲ್ಲಿ ಖಾಲಿ ಇರುವ ವಿವಿಧ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ತಾತ್ಕಾಲಿಕವಾಗಿ ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ:** 1) ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ ಜಿಓಬಿ(1) 585/2000 ದಿನಾಂಕ 03/12/2003 ರೊಂದಿಗೆ ಲಗತ್ತಿಸಿರುವ ಕರ್ನಾಟಕ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಇವರ ಕಛೇರಿಯಲ್ಲಿ ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ನಡೆದ ನಡವಳಿಕೆಗಳು.

2) ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆಃ ಜಿಓಬಿ(1) 585/2000 ದಿನಾಂಕ 20/02/2004 ರೊಂದಿಗೆ ಲಗತ್ತಿಸಿರುವ ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆಃ ಎಲ್‌ಎಡಬ್ಲ್ಯೂ 152 ಎಲ್‌ಸಿಇ 02, ಬೆಂಗಳೂರು ದಿನಾಂಕ 19/02/2004.

3) ಗೌರವಾನ್ವಿತ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ ಎಲ್‌ಎಡಬ್ಲ್ಯೂ 139 ಎಲ್‌ಸಿಇ 2009 ದಿನಾಂಕ 09/07/2009

ಹಾಸನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯ ಘಟಕದ ಅರಕಲಗೂಡಿನ ತ್ವರಿತ ವಿಲೇವಾರಿ ನ್ಯಾಯಾಲಯದಲ್ಲಿ ಖಾಲಿಯಿರುವ ಈ ಕೆಳಕಂಡ ಹುದ್ದೆಗಳಲ್ಲಿ ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ ಕಾರ್ಯ ನಿರ್ವಹಿಸಲು ಅರ್ಹ ಅಭ್ಯರ್ಥಿಗಳಿಂದ ಈ ಅಧಿಸೂಚನೆಯೊಂದಿಗೆ ಲಗತ್ತಿಸಲಾಗಿರುವ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ಅರ್ಜಿಗಳನ್ನು ಸಲ್ಲಿಸಲು ನಿಗದಿ ಮಾಡಿದ ಕೊನೆಯ ದಿನಾಂಕ 16/09/2009 ಸಂಜೆ 5–30 ಗಂಟೆ.**

**ಖಾಲಿ ಇರುವ ಹುದ್ದೆಗಳ ವರ್ಗೀಕರಣ**

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಹುದ್ದೆಯ ಸಂಖ್ಯೆ | ಸಂಚಿತ ವೇತನ |
|---|---|---|---|
| 1 | ಶೀಘ್ರಲಿಪಿಗಾರರು | 1 | ಮಾಹೆಯಾನ ರೂ.6000–00 |
| 2 | ಬೆರಳಚ್ಚುಗಾರರು | 1 | ಮಾಹೆಯಾನ ರೂ.5000–00 |

**ವಿದ್ಯಾರ್ಹತೆ:**

ಅ) **ಶೀಘ್ರಲಿಪಿಗಾರರು** – ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿದ ಶೀಘ್ರಲಿಪಿಗಾರರು

**ಅಥವಾ**

(1) ಎಸ್ ಎಸ್ ಎಲ್ ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

(2) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಮತ್ತು ಆಂಗ್ಲ ಪ್ರೌಢದರ್ಜೆ (Senior Grade) ಶೀಘ್ರಲಿಪಿ ಹಾಗೂ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಪ್ರೌಢದರ್ಜೆ ಪರೀಕ್ಷೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

ಆ) **ಬೆರಳಚ್ಚುಗಾರರು** – ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿದ ಬೆರಳಚ್ಚುಗಾರರು

**ಅಥವಾ**

(1) ಎಸ್ ಎಸ್ ಎಲ್ ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

(2) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಮತ್ತು ಆಂಗ್ಲ ಪ್ರೌಢದರ್ಜೆ (Senior Grade) ಬೆರಳಚ್ಚು ಪ್ರೌಢದರ್ಜೆ ಪರೀಕ್ಷೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

**ಆಯ್ಕೆ ವಿಧಾನ:**

ಶೀಘ್ರಲಿಪಿಗಾರರು ಹಾಗೂ ಬೆರಳಚ್ಚುಗಾರರ ಹುದ್ದೆಗೆ ಸಂದರ್ಶನದೊಂದಿಗೆ ಸಂಬಂಧಿಸಿದ ಪರೀಕ್ಷೆಯ ಮೂಲಕ ಆಯ್ಕೆ ಮಾಡಲಾಗುವುದು.

**ಪ್ರಮುಖ ಸೂಚನೆಗಳು:**

1) ನಿವೃತ್ತ ನೌಕರರು ತಮ್ಮ ಅರ್ಜಿಯೊಂದಿಗೆ ತಮ್ಮ ನಿವೃತ್ತಿಗೆ ಸಂಬಂಧಿಸಿದ ದಾಖಲಾತಿಗಳನ್ನು ಲಗತ್ತಿಸತಕ್ಕದ್ದು.
2) ಅರ್ಜಿಯ ಮೇಲೆ ಅಭ್ಯರ್ಥಿಗಳು ತಮ್ಮ ಇತ್ತೀಚಿನ ಒಂದು ಭಾವಚಿತ್ರವನ್ನು ಅಂಟಿಸತಕ್ಕದ್ದು ಹಾಗೂ ಅದರ ಮೇಲೆ ತಮ್ಮ ಸಹಿಯನ್ನು ಹಾಕತಕ್ಕದ್ದು.
3) ಅರ್ಜಿಯೊಂದಿಗೆ ವಿದ್ಯಾರ್ಹತೆ, ಜನ್ಮ ದಿನಾಂಕವನ್ನು ಸೂಚಿಸುವ ದಾಖಲೆ, ಅಂಕಪಟ್ಟಿ ಇವುಗಳ ಸ್ವಯಂ–ದೃಢೀಕೃತ ಪ್ರತಿಗಳನ್ನು ಲಗತ್ತಿಸತಕ್ಕದ್ದು.
4) ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ, ಗೆ ಸೇರಿದ ಅಭ್ಯರ್ಥಿಗಳು ಸಂಬಂಧಿಸಿದ ಪ್ರಾಧಿಕಾರದಿಂದ ಪಡೆದ ಮೀಸಲಾತಿ ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು.
5) ಅರ್ಜಿಯಲ್ಲಿರುವ ಎಲ್ಲಾ ಅಂಕಣಗಳನ್ನು ಭರ್ತಿ ಮಾಡತಕ್ಕದ್ದು. ಅಪೂರ್ಣ ಮಾಹಿತಿಯುಳ್ಳ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
6) ಭರ್ತಿ ಮಾಡಿದ ಅರ್ಜಿಯೊಂದಿಗೆ 6–00 ರೂಗಳ ಅಂಚೆ ಚೀಟಿ ಅಂಟಿಸಿದ ಸ್ವ–ವಿಳಾಸದ ಲಕೋಟೆಯನ್ನು ಲಗತ್ತಿಸತಕ್ಕದ್ದು.
7) ಕೊನೆಯ ದಿನಾಂಕದ ನಂತರ ಬರುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
8) ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಆಹ್ವಾನಿಸಿದಲ್ಲಿ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.
9) ತಿರಸ್ಕೃತ ಅರ್ಜಿಗಳ ಬಗ್ಗೆ ಅಥವಾ ಸಂದರ್ಶನಕ್ಕೆ ಅನರ್ಹರಾದ ಬಗ್ಗೆ ಯಾವುದೇ ಪತ್ರ ವ್ಯವಹಾರ ಮಾಡಲಾಗುವುದಿಲ್ಲ.
10) ಹುದ್ದೆಗಳು ಸಂಪೂರ್ಣ ತಾತ್ಕಾಲಿಕವಾಗಿದ್ದು, ಯಾವುದೇ ಸಂದರ್ಭದಲ್ಲಾದರೂ ತೆಗೆದುಹಾಕುವ ನಿಬಂಧನೆಗೆ ಒಳಗಾಗಿರುತ್ತವೆ.

**ಕೆ. ಸೋಮಶೇಖರ್**

ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಹಾಸನ.

## ಅರ್ಜಿ ನಮೂನೆ

### ಶೀಘ್ರಲಿಪಿಗಾರರ / ಬೆರಳಚ್ಚುಗಾರರ ಹುದ್ದೆಗೆ ಅರ್ಜಿ

ಗೆ ::
ಮಾನ್ಯ ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು,
ಹಾಸನ.

| ಪಾಸ್ ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಬೇಕು |
|---|

ಮಾನ್ಯರೆ,

ತಮ್ಮ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ 7/2009, ದಿನಾಂಕ 17–08–2009 ರ ನೇಮಕಾತಿ ಪ್ರಕಟಣೆಯ ಮೇರೆಗೆ ಅರಕಲಗೂಡಿನ ತ್ವರಿತಗತಿ ನ್ಯಾಯಾಲಯದಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ / ಬೆರಳಚ್ಚುಗಾರರ ಹುದ್ದೆಗೆ ಆಯ್ಕೆ ಬಯಸಿ ಕೆಳಕಂಡ ಮಾಹಿತಿಗಳೊಂದಿಗೆ ನನ್ನ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ.

| | | | |
|---|---|---|---|
| 1. ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ) | | | |
| 2. ತಂದೆಯ : ತಾಯಿಯ : ಗಂಡನ ಹೆಸರು | | | |
| 3. ಪೂರ್ಣ ವಿಳಾಸ | | | |
| 4. ಹುಟ್ಟಿದ ದಿನಾಂಕ ಮತ್ತು ಅರ್ಜಿ ಸಲ್ಲಿಸಲು ನಿಗದಿ ಪಡಿಸಿದ ಕೊನೆಯ ದಿನಾಂಕಕ್ಕೆ ವಯಸ್ಸು (ಸೂಕ್ತ ದಾಖಲೆಯನ್ನು ಲಗತ್ತಿಸತಕ್ಕದ್ದು | | | |
| 5. ಲಿಂಗ | ಗಂಡು | ಹೆಣ್ಣು | |
| 6. ಜಾತಿ | | | |
| 6. ವಿದ್ಯಾರ್ಹತೆ | ಉತ್ತೀರ್ಣರಾದ ವರ್ಷ ಮತ್ತು ತಿಂಗಳು | ಗರಿಷ್ಠ ಅಂಕಗಳು | ಪಡೆದ ಅಂಕಗಳು |
| ಅ. 10ನೇ ತರಗತಿ | | | |
| ಆ. ಕನ್ನಡ ಶೀಘ್ರಲಿಪಿ ಪ್ರೌಢದರ್ಜೆ | | | |
| ಆ. ಆಂಗ್ಲ ಶೀಘ್ರಲಿಪಿ ಪ್ರೌಢದರ್ಜೆ | | | |
| ಇ. ಕನ್ನಡ ಬೆರಳಚ್ಚು ಪ್ರೌಢದರ್ಜೆ | | | |
| ಈ. ಆಂಗ್ಲ ಬೆರಳಚ್ಚು ಪ್ರೌಢದರ್ಜೆ | | | |
| 7. ಇತರೆ ಹೆಚ್ಚುವರಿ ವಿದ್ಯಾರ್ಹತೆ | | | |
| 8. ಯಾವುದಾದರೂ ಅಪರಾಧದಲ್ಲಿ ಭಾಗಿಯಾಗಿರುವರೇ ? | | | |
| 8. ನೀವು ನಿವೃತ್ತ ಸರ್ಕಾರಿ ನೌಕರರೇ? ಹೌದಾದರೆ, ಪಿಂಚಣಿ ಆದೇಶವನ್ನು ಲಗತ್ತಿಸತಕ್ಕದ್ದು. | | | |
| 9) ಲಗತ್ತಿಸಿರುವ ದಾಖಲಾತಿಗಳು | | | |

ದಿನಾಂಕ:

ಸ್ಥಳ: ಅಭ್ಯರ್ಥಿಯ ಸಹಿ.

ಪಿ.ಆರ್. 695

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**
**ಕಾರ್ಯನಿರ್ವಾಹಕ ಇಂಜಿನೀಯರರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.**
**ತಿದ್ದುಪಡಿ ಪ್ರಕಟಣೆ**
**(ಸ್ಟಾಂಡರ್ಡ್ ಟೆಂಡರ್ ಡಾಕ್ಯೂಮೆಂಟ್ ಕೆಡಬ್ಲ್ಯೂ–3)**
**ಕ್ರ.ಸಂ.ಸನೀ.ವಿ.ಬೆಳಗಾವಿ/ಸ.ಇಂ./ಟೆಂಡರ್/09–10/2804, ದಿನಾಂಕ: 19ನೇ ಆಗಸ್ಟ್ 2009**

ಈ ಕಛೇರಿ ಟೆಂಡರ್ ಪ್ರಕಟಣೆ ಕ್ರ.ಸಂ.ಸನೀ.ವಿ.ಬೆಳಗಾವಿ/ಸ.ಇಂ./ ಟೆಂಡರ್/ 09–10/2766 ದಿನಾಂಕ:13.08.09ರಲ್ಲಿ ಆಹ್ವಾನಿಸಲಾದ, ಈ ಕೆಳಗಿನ ಕಾಮಗಾರಿಗಳ ಟೆಂಡರಿಗಿಟ್ಟ ಅಂದಾಜು ಮೊತ್ತ, ಇಡಗಂಟು ಮೊತ್ತ ಹಾಗೂ ಟೆಂಡರ್ ಫಾರಂ ಬೆಲೆ ರೂ.+ತೆರಿಗೆ ಪ್ರತ್ಯೇಕ ಹಿಂದಿರುಗಿಸಲಾಗದು ಇವುಗಳನ್ನು ಪರಿಷ್ಕೃತಗೊಳಿಸಲಾಗಿದೆ.

| ಕ್ರ. ಸಂ | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡಗಂಟು ಮೊತ್ತ (ರೂ. ಗಳಲ್ಲಿ) | ಟೆಂಡರ್ ಫಾರಂ ಬೆಲೆ ರೂ.+ತೆರಿಗೆ ಪ್ರತ್ಯೇಕ ಹಿಂದಿರುಗಿ ಸಲಾಗದು | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಸೇರಿ |
|---|---|---|---|---|---|
| 1 | ಬೆಳಗಾವಿ ಜಿಲ್ಲೆ ಖಾನಾಪೂರ ತಾಲ್ಲೂಕಿನ ಸಾಗರೆ ಹತ್ತಿರ ತಟ್ಟಿಹಳ್ಳಕ್ಕೆ ಬ್ರಿಡ್ಜ್–ಕಂ–ಬ್ಯಾರೇಜ್ ನಿರ್ಮಾಣ | 69.52 | 139100/– | 7000+ ತೆರಿಗೆ | 6 ತಿಂಗಳು (ಮಳೆಗಾಲ ಸೇರಿ) |
| 2 | ಬೆಳಗಾವಿ ಜಿಲ್ಲೆ ಬೆಳಗಾವಿ ತಾಲ್ಲೂಕಿನ ಹಿಂಡಲಗಾ ಗ್ರಾಮದ ಹತ್ತಿರ ಮಾರ್ಕಂಡೇಯ ನದಿಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ | 53.51 | 107100/– | 5400+ ತೆರಿಗೆ | 6 ತಿಂಗಳು (ಮಳೆಗಾಲ ಸೇರಿ) |

ಮೇಲಿನ ಕಾಮಗಾರಿಗಳಿಗೆ ಈ ಕೆಳಗಿನಂತೆ ದಿನಾಂಕಗಳನ್ನು ನಿಗದಿಪಡಿಸಲಾಗಿದೆ.

1. ಖಾಲಿ ಟೆಂಡರ್ ಪುಸ್ತಕಗಳಿಗಾಗಿ ಅರ್ಜಿ ಸಲ್ಲಿಸಿ ಖಾಲಿ ಟೆಂಡರ್ ಪುಸ್ತಕಗಳನ್ನು ಈ ಕಛೇರಿಯಲ್ಲಿ ಪಡೆಯುವ ದಿನಾಂಕಗಳು (ಕಚೇರಿ ವೇಳೆಯಲ್ಲಿ) : **11/09/2009 ರಿಂದ 16/09/2009**
**(ಸದರಿ ಕಾಮಗಾರಿಗಳಿಗಾಗಿ ಅವಶ್ಯವಿರುವ ಯಂತ್ರೋಪಕರಣಗಳನ್ನು ಸ್ವತಃ ಅಥವಾ ಲೀಜ್ ಮೇಲೆ ಹೊಂದಿರುವ, ಲೀಜ್ ಆಗಿದ್ದಲ್ಲಿ ಜಿ.ಪಿ.ಎ.ಮೂಲ ದಾಖಲಾತಿ ಒದಗಿಸುವುದು, ಹಾಗೂ ಶೇಕಡಾ 50ರಷ್ಟು ವಾಹನಗಳ ಸ್ವಂತ ಮಾಲಿಕತ್ವ ಹೊಂದಿರುವ ಎಲ್ಲಾ ವಿವರಗಳನ್ನು ಅರ್ಜಿಯ ಜೊತೆಗೆ ಲಗತ್ತಿಸಿ ಅರ್ಜಿಯನ್ನು ಸಲ್ಲಿಸುವುದು).**
2. ಭರ್ತಿ ಮಾಡಿದ ಟೆಂಡರ್ ಸ್ವೀಕರಿಸುವ ದಿನಾಂಕ : **23/09/2009 ಸಂಜೆ 16.00** ಘಂಟೆಯೊಳಗಾಗಿ
3. ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕ :**24/09/2009 ಸಂಜೆ 16.00** ಘಂಟೆ.(ಸಾಧ್ಯವಾದಲ್ಲಿ)
4. ಆರ್ಥಿಕ ಬಿಡ್‌ನ್ನು ತೆರೆಯುವ ದಿನಾಂಕ : ತದನಂತರ ತಿಳಿಸಲಾಗುವುದು.

**ಬಾಕಿ ಉಪವಿಧಿ ಹಾಗೂ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.**

**ವ್ಹಿ.ಬಿ. ಕುಲಕರ್ಣಿ**
ಕಾರ್ಯನಿರ್ವಾಹಕ ಇಂಜನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

**WATER RESOURCES DEPARTMENT (MINOR IRRIGATION)**
**M.I.DIVISION, BELGAUM.**
**CORRIGENDUM**
**(As per Standard Tender Document KW-3)**
**IFT No.EE /MID/BGM/TND/AE /09-10/2804, Date: 19th August 2009**

This Office Invitation of Tender Notification IFT No.EE /MID/BGM/TND/AE /09-10/2766 Date:13.08.2009 for the below works Approximate value of work put to tender, Earnest Money Deposit & Cost of documents are Revised as given below.

| Sl. No | Name of work | Approximate value of work (Rs. In lakhs) | Earnest Money Deposit (Rs.) | Cost of document (Rs.) | Period of completion (including monsoon) |
|---|---|---|---|---|---|
| 1 | Construction of Bridge-Cum-Barrage near Sagare Village in Khanapur Tq. Belgaum Dist. | 69.52 | 1,39,100/- | 7,000.00+ Tax | 6 months (including monsoon) |

| Sl. No | Name of work | Approximate value of work (Rs. In lakhs) | Earnest Money Deposit (Rs.) | Cost of document (Rs.) | Period of completion (including monsoon) |
|---|---|---|---|---|---|
| 2 | Construction of Barrage across Markandeya River Near Hindalga Village in Tq.& Dist.Belgaum | 53.51 | 1,07,100/- | 5,400.00+ Tax | 6 months (including monsoon) |

1. Tender documents may be purchased from this office (Office hours): Dt : 11/09/2009 to 16/09/2009 **(Each Tenderer further demonstrate as given in conditions clause-3 availability by owning at least 50% of the required/ specified key and critical equipments for this work and the remaining 50% can be deployed on lease/ hire basis for all works provided, the relevant documents (commitment, agreements etc.) for availability for this work are furnished with the Tender application)**
2. Date of receipt of tender document (up to 16.00hrs) Dt : 23/09/2009
3. Date of opening of Technical Bid: Dt.24-9-2009 at 16.00 hrs (if possible)
4. Date of opening of Financial Bid : intimated later.

No changes in other terms & conditions already mentioned.

**V.B. KULKARNI**

P.R. 696 Executive Engineer, M.I.Division, Belgaum.

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಮಂಗಳೂರು ವಿಭಾಗ, ಮಂಗಳೂರು**

**ಇ–ಟೆಂಡರ್ – ಪ್ರಕಟಣೆ (ದ್ವಿಲಕೋಟೆ ಪದ್ಧತಿ)**

**ಸಂಖ್ಯೆ:ಲೋ.ಇ.ಮಂವಿ:ಟಿಎನ್‌ಡಿ(24ಇ):2009–10:ಎಇ–1, ಮಂಗಳೂರು, ದಿನಾಂಕ: 18ನೇ ಆಗಸ್ಟ್ 2009**

1. ಈ ಕೆಳಗೆ ತಿಳಿಸಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಇ–ಟೆಂಡರ್‌ನ್ನು ಕರ್ನಾಟಕ ಸರಕಾರದ ರಾಜ್ಯಪಾಲರ ಪರವಾಗಿ ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ https://eproc.karnataka.gov.in ನಲ್ಲಿ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ಅರ್ಹರಾದ ಗುತ್ತಿಗೆದಾರರಿಂದ ಟೆಂಡರನ್ನು ದ್ವಿಲಕೋಟೆ ಪದ್ಧತಿಯಲ್ಲಿ ಆಹ್ವಾನಿಸಿರುತ್ತಾರೆ. ಟೆಂಡರುದಾರರು ಟೆಂಡರ್ ನಿಯಮಾವಳಿಯ ಕ್ಲಾಜ್ 3 ರಂತೆ ಅರ್ಹತೆಯನ್ನು ಪಡೆದಿರಬೇಕು ಎಂಬುದನ್ನು ಗಮನಿಸಲು ಸೂಚಿಸಲಾಗಿದೆ.
2. ದಿನಾಂಕ: 15.9.2009 ರಿಂದ ಟೆಂಡರುದಾರರು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್ ಜಾಲದ ವೆಬ್‌ಸೈಟ್ ಮುಖಾಂತರ ಟೆಂಡರು ಡಾಕ್ಯುಮೆಂಟ್‌ಗಳನ್ನು ಪಡೆಯಬಹುದಾಗಿರುತ್ತದೆ. (Download).
3. ಟೆಂಡರುಗಳು ಈ ಕೆಳಗೆ ನೀಡಲಾದ ವಿವರದಂತೆ ಕಾಮಗಾರಿಗೆ ನಿಗದಿಪಡಿಸಿದ ಇಂ.ಎಂ.ಡಿಯನ್ನು ಟೆಂಡರ್ ಜೊತೆಯಲ್ಲಿ ಲಗತ್ತಿಸಬೇಕು. ಇ.ಎಂ.ಡಿ.ಯನ್ನು ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ ಸೂಚಿಸಿರುವಂತೆ ಯಾವುದಾದರೂ ಒಂದು ರೀತಿಯಲ್ಲಿ ಸಲ್ಲಿಸಬಹುದಾಗಿರುತ್ತದೆ ಮತ್ತು ಅದರ ಊರ್ಜಿತ ಅವಧಿಯು ಟೆಂಡರು ಊರ್ಜಿತ ಅವಧಿಗಿಂತ 45 ದಿನಗಳು ಹೆಚ್ಚಾಗಿ ಇರಬೇಕು.
4. ಟೆಂಡರುಗಳನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಆನ್‌ಲೈನ್‌ನಲ್ಲಿ ದಿನಾಂಕ: 22.09.2009 ರ ಅಪರಾಹ್ನ 4.00 ಗಂಟೆ (16.00 ಗಂಟೆ) ಒಳಗೆ ಸಲ್ಲಿಸತಕ್ಕದ್ದು. ಟೆಂಡರನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಮಾರ್ಗಸೂಚಿಯಂತೆ ತೆರೆಯಲಾಗುವುದು.
5. ಹೆಚ್ಚಿನ ವಿವರಗಳನ್ನು ಟೆಂಡರು ಡಾಕ್ಯುಮೆಂಟ್‌ನಲ್ಲಿ ಪಡೆಯಬಹುದಾಗಿರುತ್ತದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಇ.ಎಂ.ಡಿ ಠೇವಣಿ (ರೂ.ಲಕ್ಷ ಗಳಲ್ಲಿ) | ಕಾಮಗಾರಿಯನ್ನು ಪೂರ್ಣಗೊಳಿಸಲು ಕಾಲಾವಧಿ (ಮಳೆಗಾಲ ಹೊರತು ಪಡಿಸಿ) |
|---|---|---|---|---|
| | **3054 ರಸ್ತೆ ಮತ್ತು ಸೇತುವೆ (ಯೋಜನೆ)– ಮುಖ್ಯ ಮಂತ್ರಿಗಳ ಗ್ರಾಮೀಣ ರಸ್ತೆ ಅಭಿವೃದ್ಧಿ ನಿಧಿಯಡಿ:–** | | | |
| 1 | ಮಂಗಳೂರು ತಾಲ್ಲೂಕು ಪರಾರಿ–ಉಳಾಯಿಬೆಟ್ಟು ರಸ್ತೆಯ ಕಿ.ಮೀ. 0.00 ರಿಂದ 5.00 ಕಿ.ಮೀ. ವರೆಗೆ ದುರಸ್ತಿ ಹಾಗೂ ನಿರ್ವಹಣಾ ಕಾಮಗಾರಿ. | 157.00 | 2.36 | 12 ತಿಂಗಳು |

ಕಾರ್ಯನಿರ್ವಾಹಕ ಇಂಜಿನಿಯರ್,
ಪಿ.ಆರ್. 684 ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ
## ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ
## ಮಂಗಳೂರು ವಿಭಾಗ, ಮಂಗಳೂರು

**ಸಂಖ್ಯೆ:ಲೋ.ಇ.ಮಂವಿ:ಟಿ.ಎನ್.ಡಿ(13ಇ):2009–10:ಎಇ–1, ಮಂಗಳೂರು, ದಿನಾಂಕ: 18ನೇ ಆಗಸ್ಟ್ 2009**

ದಿನಾಂಕ: 4.08.2009ರ 'ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್' ಮತ್ತು 'ಹೊಸದಿಗಂತ' ದಿನಪತ್ರಿಕೆಗಳಲ್ಲಿ ಪ್ರಕಟವಾದ ಈ ಕಛೇರಿಯ ಪ್ರಕಟಣೆ ಸಂಖ್ಯೆ:ಲೋ.ಇ:ಮಂವಿ:ಟಿ.ಎನ್.ಡಿ(13ಇ):2009–10:ಎಇ–1 ದಿನಾಂಕ: 31.07.2009 ರಲ್ಲಿ ಪ್ರಕಟಿಸಲಾದ, ದ.ಕ. ಜಿಲ್ಲೆ ಪುತ್ತೂರಿನಲ್ಲಿ ಮಿನಿ ವಿಧಾನ ಸೌಧ ಕಟ್ಟಡ ನಿರ್ಮಾಣ ಕಾಮಗಾರಿಯ ಟೆಂಡರನ್ನು ಅನಿರ್ದಿಷ್ಟಾವಧಿಗೆ ಮುಂದೂಡಲಾಗಿದೆ.

ಕಾರ್ಯನಿರ್ವಾಹಕ ಇಂಜಿನಿಯರ್,
ಪಿ.ಆರ್. 685 ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ
## ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ
## ಮಂಗಳೂರು ವಿಭಾಗ, ಮಂಗಳೂರು
### ಸಮಯಾವಧಿ ವಿಸ್ತರಣೆ

**ಸಂಖ್ಯೆ:ಲೋ.ಇ:ಮಂವಿ:ಟಿ.ಎನ್.ಡಿ(14ಇ):2009–10:ಎಇ1, ದಿನಾಂಕ: 18ನೇ ಆಗಸ್ಟ್ 2009**

ದಿನಾಂಕ:5.8.2009ರ 'ಕರಾವಳಿ ಅಲೆ' ಮತ್ತು ದಿನಾಂಕ: 6.8.2009ರ 'ಡೆಕ್ಕನ್ ಹೆರಾಲ್ಡ್' ದಿನಪತ್ರಿಕೆಗಳಲ್ಲಿ ಪ್ರಕಟವಾದ ಈ ಕಛೇರಿಯ ಟೆಂಡರ್ ನೋಟೀಫಿಕೇಶನ್ ನಂ: ಲೋ.ಇ:ಮಂ.ವಿ:ಟಿ.ಎನ್.ಡಿ(14ಇ):2009–10:ಎಇ1 ದಿನಾಂಕ:3.8.2009ರಲ್ಲಿ ಪ್ರಕಟವಾದ ಬಂಟ್ವಾಳ ತಾಲ್ಲೂಕಿನ ಬೈತುರ್ಲಿ ನೀರುಮಾರ್ಗ ಕಲ್ಪನೆ ರಸ್ತೆಯ ಕಿ.ಮೀ. 13.00 ರಿಂದ 15.30 ರವರೆಗೆ ರಸ್ತೆ ಅಗಲಗೊಳಿಸಿ ಡಾಮರೀಕರಣ ಮತ್ತು ಅಭಿವೃದ್ಧಿ ಕಾಮಗಾರಿಗೆ ಈ ಕೆಳಗಿನಂತೆ ಸಮಯಾವಧಿ ವಿಸ್ತರಣೆ ಮಾಡಲಾಗಿದೆ.

1. ದಿನಾಂಕ:24.8.2009 ರಿಂದ ಟೆಂಡರುದಾರರು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ ಮುಖಾಂತರ ಟೆಂಡರು ಡಾಕ್ಯುಮೆಂಟ್‌ಗಳನ್ನು ಪಡೆಯಬಹುದಾಗಿರುತ್ತದೆ. (Download)
2. ಟೆಂಡರುಗಳನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಆನ್‌ಲೈನ್‌ನಲ್ಲಿ ದಿನಾಂಕ:4.09.2009 ಅಪರಾಹ್ನ 4.00 ಗಂಟೆ (16:00 ಗಂಟೆ) ಒಳಗೆ ಸಲ್ಲಿಸತಕ್ಕದ್ದು. ಟೆಂಡರನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಮಾರ್ಗಸೂಚಿಯಂತೆ ತೆರೆಯಲಾಗುವುದು.

ಮೇಲಿನ ಬದಲಾವಣೆಗಳನ್ನು ಹೊರತುಪಡಿಸಿ ಇನ್ನಾವುದೇ ಬದಲಾವಣೆ ಇರುವುದಿಲ್ಲ. ಹೆಚ್ಚಿನ ವಿವರಗಳನ್ನು ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ https://eproc.karnataka.gov.in ನಲ್ಲಿರುವ ಟೆಂಡರು ಡಾಕ್ಯುಮೆಂಟ್‌ನಲ್ಲಿ ಪಡೆಯಬಹುದಾಗಿದೆ. ಹಾಗೂ ನೋಟಿಫಿಕೇಷನ್‌ನ್ನು http//www.kpwd.gov.in ಇಲಾಖಾ ವೆಬ್‌ಸೈಟ್‌ನಲ್ಲಿ ಪಡೆಯಬಹುದು.

ಕಾರ್ಯನಿರ್ವಾಹಕ ಇಂಜಿನಿಯರ್
ಪಿ.ಆರ್. 686 ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಮಂಗಳೂರು ವಿಭಾಗ, ಮಂಗಳೂರು**

**ಅಲ್ಪಾವಧಿ ಟೆಂಡರ್ ಪ್ರಕಟಣೆ**

**ಸಂಖ್ಯೆ:ಲೋಇ:ಮಂವಿ:ಟಿ.ಎನ್‌ಡಿ(25):2009–10:ಎಇ–1, ಮಂಗಳೂರು, ದಿನಾಂಕ: 18ನೇ ಆಗಸ್ಟ್ 2009**

ಈ ಕೆಳಕಂಡ ಕೆಲಸಕ್ಕೆ ಪ್ರತ್ಯೇಕ ಮೊಹರಾದ ಟೆಂಡರುಗಳನ್ನು ದ್ವಿಪ್ರತಿಗಳಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಲಾದ ಅರ್ಹ ದರ್ಜೆಯ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿದ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ದಿನಾಂಕ: 4.09.2009 ರಂದು ಸಂಜೆ:4.00 ಗಂಟೆಯವರೆಗೆ ಟೆಂಡರುಗಳನ್ನು ಸ್ವೀಕರಿಸುವರು.

ಖಾಲಿ ಟೆಂಡರು ಫಾರಂಗಳ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂತಿರುಗಿಸುವುದಿಲ್ಲ) ಮತ್ತು ನಿಗದಿಪಡಿಸಿದ ಇ.ಎಂ.ಡಿ.ಯೊಂದಿಗೆ ದಿನಾಂಕ: 1.09.2009ರ ವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಗುತ್ತಿಗೆದಾರರು ರಿಜಿಸ್ಟ್ರೇಷನ್ ಸರ್ಟಿಫೈಡ್ ಪ್ರತಿ ಹಾಗೂ ಈ ತರಹದ ಕಾಮಗಾರಿಗಳನ್ನು ಕೈಗೊಂಡ ಬಗ್ಗೆ ಅನುಭವ ಪತ್ರವನ್ನು ಸಲ್ಲಿಸತಕ್ಕದ್ದು. ಬಿಡ್ ಡಾಕ್ಯುಮೆಂಟ್ Section 3ರಲ್ಲಿ ಕೇಳಿರುವ Qualification Information ನ್ನು ನಿಗದಿತ ನಮೂನೆಯಲ್ಲಿ ಅರ್ಜಿದಾರರು ಭರ್ತಿ ಮಾಡಿ ಸಲ್ಲಿಸತಕ್ಕದ್ದು. ಖಾಲಿ ಟೆಂಡರು ಫಾರಂಗಳನ್ನು ದಿನಾಂಕ: 3.09.2009 ರಿಂದ ನೀಡಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಗುತ್ತಿಗೆದಾರರ ಅರ್ಹತೆ | ಇ.ಎಂ.ಡಿ ಠೇವಣಿ (ರೂ.ಗಳಲ್ಲಿ) | ಟೆಂಡರು ಅವಧಿ (ಮಳೆಗಾಲ ಹೊರತು ಪಡಿಸಿ) | ಟೆಂಡರು ಫಾರಂ ಬೆಲೆ ತೆರಿಗೆ ಸೇರಿ (ರೂ.ಗಳಲ್ಲಿ) |
|---|---|---|---|---|---|---|
| **I** | **ಲೆಕ್ಕಶೀರ್ಷಿಕೆ:8443 ಠೇವಣಿ ಕೊಡುಗೆ** | | | | | |
| 1 | ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ತಾಲ್ಲೂಕಿನ ಮೂಡಬಿದ್ರೆ ಶಾಖಾ ಗ್ರಂಥಾಲಯ–ಕಟ್ಟಡ ವಿಸ್ತರಣೆ | 4.80 | 3ನೇ ದರ್ಜೆ ಮತ್ತು ಮೇಲ್ಪಟ್ಟು | 12000.00 | 3 ತಿಂಗಳು | 1100.00 |

**ಸೂಚನೆಗಳು:–**

1. ಉದ್ದೇಶಿಸಿರುವ ಕಾಮಗಾರಿಯ ಶೇ. 50ರಷ್ಟು ಮೊತ್ತದ ಇದೇ ತರಹದ ಕಾಮಗಾರಿಯನ್ನು ಕಳೆದ 5 ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು. ಈ ಕುರಿತು ಪ್ರಮಾಣಪತ್ರವನ್ನು ಸಕ್ಷಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.
2. ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರುಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.
3. ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್ / ಕಾಲ್‌ಡೆಪೋಸಿಟ್, ಡಿ.ಡಿ ಅಥವಾ ಎನ್.ಎಸ್.ಸಿ. ರೂಪದಲ್ಲಿ (ಎನ್‌ಎಸ್‌ಸಿಯನ್ನು ಕೆಳಸಹಿದಾರರ ಹೆಸರಿಗೆ ಪ್ಲೆಡ್ಜ್ ಮಾಡಿ) ಸಲ್ಲಿಸಬೇಕು. ನಿಗದಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
4. ಗುತ್ತಿಗೆದಾರರು ಕೆಲಸವನ್ನು ನಿಗದಿತ ಸಮಯದಲ್ಲಿ ಮಾಡಿ ಮುಗಿಸತಕ್ಕದ್ದು, ತಪ್ಪಿದಲ್ಲಿ ನಿಯಮದಂತೆ ದಂಡವನ್ನು ವಿಧಿಸಲಾಗುವುದು.
5. ಕಾಮಗಾರಿಗೆ ಬೇಕಾದ ಸಿಮೆಂಟ್, ಉಕ್ಕು ಮತ್ತು ಇನ್ನಿತರ ಎಲ್ಲಾ ಸಾಮಗ್ರಿಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು ಹಾಗೂ ಇದನ್ನು ಸಕ್ಷಮ ಅಧಿಕಾರಿಯವರಿಂದ ಪರೀಕ್ಷೆ ಪಡೆದು ಫಲಿತಾಂಶವು ಐ.ಎಸ್.ಐ. ಗುಣವನ್ನು ಖಚಿತಪಡಿಸಿ ಕೆಲಸಕ್ಕೆ ಉಪಯೋಗಿಸತಕ್ಕದ್ದು. ಈ ಅಂಶವನ್ನು ಗುತ್ತಿಗೆದಾರರು ಟೆಂಡರನ್ನು ಸಲ್ಲಿಸುವಾಗ ಗಮನಿಸುವುದು.
6. ಯಶಸ್ವಿ ಟೆಂಡರುದಾರರು ನಿರ್ವಹಿಸುವ ಕಾಮಗಾರಿಯ ಮೊತ್ತದ ಶೇ.1ರಷ್ಟನ್ನು ಲೇಬರ್ ಸೆಸ್‌ನ್ನಾಗಿ ಸರಕಾರಿ ಆದೇಶ ಸಂ. ಯಲ್‌ಡಿ 3:ಎಲ್‌ಇಡಿ 2006:ಬೆಂಗಳೂರು: ದಿನಾಂಕ: 18.1.2007ರಂತೆ ಕಡಿತಗೊಳಿಸಲಾಗುವುದು.
7. ಕೆಲಸದ ಕುರಿತಾದ ಯಾವುದೇ ವಿವರಗಳನ್ನು ಕಛೇರಿ ವೇಳೆಯಲ್ಲಿ ಈ ಕಛೇರಿಯಿಂದ ಪಡೆಯಬಹುದಾಗಿದೆ. ಹಾಗೂ ಇಲಾಖೆಯ ವೆಬ್‌ಸೈಟ್ "htpp://www.kpwd.gov.in" ನಲ್ಲಿ ಸಂಪರ್ಕಿಸಬಹುದು.

ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

ಪಿ.ಆರ್. 687

## ಸರ್ವ ಶಿಕ್ಷಣ ಅಭಿಯಾನ, ಸಾರ್ವಜನಿಕ ಶಿಕ್ಷಣ ಇಲಾಖೆ, ತುಮಕೂರು

## ಟೆಂಡರ್ ಬುಲೆಟಿನ್

**ಕ್ರಮಾಂಕ:– ಟೆಂಡರ್ ಬುಲೆಟಿನ್–1/09–10, ದಿನಾಂಕ: 18ನೇ ಆಗಸ್ಟ್ 2009**

| ಕ್ರ.ಸಂ | ಟೆಂಡರ್ ಹೊರಡಿಸಿರುವ ಪ್ರಾಧಿಕಾರ | ಟೆಂಡರ್ ಕ್ರಮಾಂಕ ಹಾಗೂ ದಿನಾಂಕ | ಸಾಮಗ್ರಿ ಖರೀದಿ ವಿವರ | ಅಂದಾಜು ಮೊತ್ತ ಲಕ್ಷ ರೂ.ಗಳಲ್ಲಿ | ಇ.ಎಂ.ಡಿ. ಮೊತ್ತ | ಖಾಲಿ ಟೆಂಡರ್ ಫಾರಂಗಳಿಗೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ | ಖಾಲಿ ಟೆಂಡರ್ ಫಾರಂಗಳನ್ನು ವಿತರಿಸುವ ದಿನಾಂಕ | ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ | ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ತೆರೆಯುವ ದಿನಾಂಕ | ಟೆಂಡರ್ ಸ್ವೀಕರಿಸುವ ಪ್ರಾಧಿಕಾರ |
|---|---|---|---|---|---|---|---|---|---|---|
| 1 | ಉಪನಿರ್ದೇಶಕರು ಹಾಗೂ ಜಿಲ್ಲಾ ಯೋಜನಾ ಸಮನ್ವಯಾಧಿಕಾರಿ ಗಳು ಸರ್ವ ಶಿಕ್ಷಣ ಅಭಿಯಾನ ಸಾ.ಶಿ.ಇಲಾಖೆ ತುಮಕೂರು ಜಿಲೆ (ದಕ್ಷಿಣ) | ಸ.ಶಿ.ಅ.ತು/ ಪಿ1/ಲೆ.ಶಾ/ ಸಾ.ಶ.ಪಿ.ಖರೀ ದಿ 1/09–10 ದಿನಾಂಕ 25–7–09 | 5 feet L X 12 inch W , 32 inch/31 inch H desk (1 inch slope) and 5 feet L X 12 inch W X 18 inch H , bench frame made out of 1 inch sq, 18 gauge Sq pipe tabular attached with 2 inch X 1 inch, 18 gauge tabular section fixed with 19mm ISI brand good quality water proof block board pasted with laminate sheet of 0.8 mm thick provided with a shelf of 8 inch breadth to keep the bags and books. The block board edges lipped with Teak Wood beedings. The entire frame shall be painted with dull black paint with a coat of steel primer. (Including transport cost to concerned schools in 10 blocks) | 302.50 ಲಕ್ಷ | 7.60 ಲಕ್ಷ | 10–9–09 ರಿಂದ 8–10–09 | 14–9–09 ರಿಂದ 15–10–09 | 23–10–09 | 26–10–09 | ಜಿಲ್ಲಾ ಯೋಜನಾ ಸಮನ್ವಯಾಧಿಕಾರಿಗಳು ಸರ್ವ ಶಿಕ್ಷಣ ಅಭಿಯಾನ ಸಮಿತಿ ತುಮಕೂರು |

ಉಪನಿರ್ದೇಶಕರು ಹಾಗೂ ಜಿಲ್ಲಾ ಯೋಜನಾ ಸಮನ್ವಯಾಧಿಕಾರಿಗಳು
ಸರ್ವ ಶಿಕ್ಷಣ ಅಭಿಯಾನ ಸಾ.ಶಿ.ಇಲಾಖೆ,
ತುಮಕೂರು (ದ) ಜಿಲ್ಲೆ ತುಮಕೂರು

**SARVA SHIKSHANA ABHIYANA, DEPT OF PUBLIC INSTRUCTION, TUMKUR DISTRICT**
**TENDER BULLETIN**
**Serial-Tender Bulletin 1/09-10, Dated: 18th August 2009**

| SL. NO | Tender Announcing Authority | Tender letter No & Date | Details of Material Specification | Approximate Amount in Lakhs | EMD Amount in Lakhs | Last Date for Submitting application to tender form | Date of issuing tender forms | Last date for receiving filled tender forms | Date of opening the tender forms | Tender receiving authority |
|---|---|---|---|---|---|---|---|---|---|---|
| 1 | DDPI & DPO SARVA SHIKSHANA ABHIYANA, DEPT OF PUBLIC INSTRU-CTION, TUMKUR (S) DISTRICT | SSA,TU/C1/LE .Sha/Sa.sha.pi. Kharidi 1/09-10 Date 25-7-09 | 5 feet L X 12 inch W , 32 inch/31 inch H desk (1 inch slope) and 5 feet L X 12 inch W X 18 inch H , bench frame made out of 1 inch sq , 18 gauge Sq pipe tabular attached with 2 inch X 1 inch, 18 gauge tabular section fixed with 19mm ISI brand good quality water proof block board pasted with laminate sheet of 0.8 mm thick provided with a shelf of 8 inch breadth to keep the bags and books. The block board edges lipped with Teak Wood beedings. The entire frame shall be painted with dull black paint with a coat of steel primer. (Including transport cost to concerned schools in 10 blocks) | 302.50 Lakhs | 7.60 Lakhs | 10-9-09 to 8-10-09 | 14-9-09 to 15-10-09 | 23 -10-09 | 26-10-09 | DDPI & DPO SARVA SHIKSHANA ABHIYANA ,DEPT OF PUBLIC INSTRUCTION, TUMKUR (S) DISTRICT |

DDPI & DPO SARVA SHIKSHANA ABHIYANA,
DEPT OF PUBLIC INSTRUCTION, TUMKUR (S) DISTRICT

P.R. 689

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 4 ಡಿಟಿಎಂ 2008, ಬೆಂಗಳೂರು, ದಿನಾಂಕ: 6ನೇ ಆಗಸ್ಟ್ 2009**

**ವಿಷಯ:** ಮುಖ್ಯ ಮಂತ್ರಿಗಳ ಸಚಿವಾಲಯಕ್ಕೆ ಫ್ರಾಂಕಿಂಗ್ ಯಂತ್ರ ಖರೀದಿಸುವ ಬಗ್ಗೆ.

ಕರ್ನಾಟಕ ಸರ್ಕಾರದ ಮುಖ್ಯ ಮಂತ್ರಿಗಳ ಸಚಿವಾಲಯಕ್ಕೆ ಫ್ರಾಂಕಿಂಗ್ ಯಂತ್ರ ಖರೀದಿಸುವ ಸಲುವಾಗಿ ಕರೆಯಲಾಗಿದ್ದ ಟೆಂಡರ್ ಪ್ರಕಟಣೆ ಸಂಖ್ಯೆ ಸಿಆಸುಇ 4 ಡಿಟಿಎಂ 2008 ದಿನಾಂಕ: 25/05/2009ನ್ನು ಈ ಮೂಲಕ ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಮಂಜುನಾಥ್**

ಪಿ.ಆರ್. 670

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಮಂಗಳೂರು ವಿಭಾಗ, ಮಂಗಳೂರು**

**ಅಲ್ಪಾವಧಿ ಟೆಂಡರ್ ಪ್ರಕಟಣೆ – 2ನೇ ಕರೆ**

**ಸಂಖ್ಯೆ:ಲೋಇ:ಮಂವಿ:ಟಿ.ಎನ್‌ಡಿ(26):2009–10:ಎಇ–1, ಮಂಗಳೂರು, ದಿನಾಂಕ: 20ನೇ ಆಗಸ್ಟ್ 2009**

ಈ ಕೆಳಕಂಡ ಕೆಲಸಕ್ಕೆ ಪ್ರತ್ಯೇಕ ಮೊಹರಾದ ಟೆಂಡರುಗಳನ್ನು ದ್ವಿಪ್ರತಿಗಳಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಲಾದ ಮೂರನೇ ದರ್ಜೆ ಹಾಗೂ ಮೇಲ್ಪಟ್ಟ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿದ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ದಿನಾಂಕ: 7.09.2009 ರಂದು ಸಂಜೆ:4.00 ಗಂಟೆಯವರೆಗೆ ಟೆಂಡರುಗಳನ್ನು ಸ್ವೀಕರಿಸುವರು.

ಖಾಲಿ ಟೆಂಡರು ಫಾರಂಗಳ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂತಿರುಗಿಸುವುದಿಲ್ಲ) ಮತ್ತು ನಿಗದಿಪಡಿಸಿದ ಇ.ಎಂ.ಡಿ.ಯೊಂದಿಗೆ ದಿನಾಂಕ: 3.09.2009ರ ವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಗುತ್ತಿಗೆದಾರರು ರಿಜಿಸ್ಟ್ರೇಷನ್ ಸರ್ಟಿಫೈಡ್ ಪ್ರತಿ ಹಾಗೂ ಈ ತರಹದ ಕಾಮಗಾರಿಗಳನ್ನು ಕೈಗೊಂಡ ಬಗ್ಗೆ ಅನುಭವ ಪತ್ರವನ್ನು ಸಲ್ಲಿಸತಕ್ಕದ್ದು. ಬಿಡ್ ಡಾಕ್ಯುಮೆಂಟ್ Section 3ರಲ್ಲಿ ಕೇಳಿರುವ Qualification Information ನ್ನು ನಿಗದಿತ ನಮೂನೆಯಲ್ಲಿ ಅರ್ಜಿದಾರರು ಭರ್ತಿ ಮಾಡಿ ಸಲ್ಲಿಸತಕ್ಕದ್ದು. ಖಾಲಿ ಟೆಂಡರು ಫಾರಂಗಳನ್ನು ದಿನಾಂಕ: 5.09.2009 ರಿಂದ ನೀಡಲಾಗುವುದು.

**ಕಾಮಗಾರಿಯ ಹೆಸರು:** ಸುಳ್ಯ ತಾಲ್ಲೂಕು ಸುಳ್ಯದಲ್ಲಿ ತಹಶೀಲ್ದಾರರ ಕಛೇರಿಯಲ್ಲಿ ಗವರ್ನಮೆಂಟ್ ಬಿಸಿನೆಸ್ ಸೆಂಟರ್ ಮತ್ತು ಐ.ಟಿ. ಸರ್ವರ್ ರೂಮ್ ಕಟ್ಟಡ ನಿರ್ಮಾಣ ಕಾಮಗಾರಿ.

**ಟೆಂಡರಿಗಿಟ್ಟ ಮೊತ್ತ:** ರೂ.6.57 ಲಕ್ಷ ಇ.ಎಂ.ಡಿ. ಠೇವಣಿ ರೂ:–16500.00 ಟೆಂಡರು ಫಾರಂ ಬೆಲೆ ರೂ:–1650–00 (ತೆರಿಗೆಸೇರಿ) ಕೆಲಸದ ಕುರಿತಾದ ಇನ್ನಿತರ ಯಾವುದೇ ವಿವರಗಳನ್ನು ಕಛೇರಿ ವೇಳೆಯಲ್ಲಿ ಈ ಕಛೇರಿಯಿಂದ ಪಡೆಯಬಹುದಾಗಿದೆ. ಹಾಗೂ ಇಲಾಖೆಯ ವೆಬ್‌ಸೈಟ್ "htpp://www.kpwd.gov.in" ನಲ್ಲಿ ಸಂಪರ್ಕಿಸಬಹುದು.

ಕಾರ್ಯನಿರ್ವಾಹಕ ಇಂಜಿನಿಯರ್

ಪಿ.ಆರ್. 690

ಲೋಕೋಪಯೋಗಿ, ಬಂದರು ಮತ್ತು ಒಳನಾಡು

ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಸಾಮಾಜಿಕ ಅರಣ್ಯ ವಿಭಾಗ, ತುಮಕೂರು**

**ತಿದ್ದುಪಡಿ ಟೆಂಡರ್–ಕಂ–ಹರಾಜು ಪ್ರಕಟಣೆ**

**ಎ1:ಬಿಯುಡಿ:ಕೆ.ಹೆಚ್.ಬಿ:ಟಿ.ಪಿ.ಆರ್:ವಿವ:09:09–10, ದಿನಾಂಕ: 19ನೇ ಆಗಸ್ಟ್ 2009**

ಈ ಮೂಲಕ ನೊಂದಾಯಿತ ಅರಣ್ಯ ಗುತ್ತಿಗೆದಾರರಿಗೆ/ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ತುಮಕೂರು ಸಾಮಾಜಿಕ ಅರಣ್ಯ ವಿಭಾಗಕ್ಕೆ ಸಂಬಂಧಿಸಿದ ಈ ಕೆಳಕಂಡ ನೆಡುತೋಪಿನಲ್ಲಿರುವ ನೀಲಗಿರಿ ಮರಗಳನ್ನು ಟೆಂಡರ್–ಕಂ–

ಹರಾಜು ಮಾಡಲಾಗುವುದು ಎಂದು ಈ ಕಛೇರಿ ಟೆಂಡರ್–ಕಂ–ಹರಾಜು ಪ್ರಕಟಣೆ ಸಂಖ್ಯೆ ಎ1:ಬಿಯುಡಿ:ಕೆ.ಹೆಚ್.ಬಿ:ಟಿ.ಪಿ.ಆರ್:ವಿವ:09/09–10 ದಿನಾಂಕ: 13.08.2009 ರ ಪ್ರಕಾರ ಪ್ರಕಟಣೆ ಹೊರಡಿಸಲಾಗಿತ್ತು. ಆದರೆ ಈ ಕೆಳಕಂಡ ನೆಡುತೋಪಿನಲ್ಲಿರುವ ಮರಗಳನ್ನು ಟೆಂಡರ್–ಕಂ–ಹರಾಜು ಮಾಡುವ ಸಂಬಂಧ ಕೈ–ತಪ್ಪಿನಿಂದಾಗಿ 150 ಮರಗಳು ಎಂದು ನಮೂದಿಸಲಾಗಿರುವುದನ್ನು ತಿದ್ದುಪಡಿ ಮಾಡಲಾಗಿದೆ. ಈ ಕೆಳಗೆ ನಮೂದಿಸಿರುವಂತೆ ಓದಿಕೊಳ್ಳುವುದು. ಇದಕ್ಕೆ ಸಾರ್ವಜನಿಕರು ಸಹಕರಿಸಬೇಕಾಗಿ ಕೋರಿದೆ. ಷರತ್ತುಗಳು ಹಿಂದಿನ ಟೆಂಡರ್–ಕಂ–ಹರಾಜು ಪ್ರಕಟಣೆಯಲ್ಲಿ ನಮೂದಿಸಿರುವಂತೆಯೇ ಇರುತ್ತದೆ.

| ಯೂನಿಟ್ ಸಂಖ್ಯೆ | ವಲಯ | ಗ್ರಾಮ ಪಂಚಾಯ್ತಿ ಹೆಸರು | ಹರಾಜಿಗೆ ಇಡಲಾಗಿರುವ ಪ್ರದೇಶದ ವಿವರ | ಅಂದಾಜು ವಿಸ್ತೀರ್ಣ | ಹರಾಜು ನಡೆಸುವ ದಿನಾಂಕ ಮತ್ತು ಸ್ಥಳ | ಮರಗಳ ಜಾತಿ |
|---|---|---|---|---|---|---|
| 1 | ತಿಪಟೂರು | ಈಡೇನಹಳ್ಳಿ | ಈಡೇನಹಳ್ಳಿ ಸರ್ವೆ.ನಂ.79 ರಲ್ಲಿ ಕರ್ನಾಟಕ ಗೃಹ ಮಂಡಳಿ ವ್ಯಾಪ್ತಿಗೆ ಒಳಪಟ್ಟಿರುವ–26 ಎಕರೆ ಪ್ರದೇಶದಲ್ಲಿ ಬರುವ ನೀಲಗಿರಿ ಮರಗಳು | 26–ಎಕರೆ | 04.09.2009 ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ಆವರಣ, ತಿಪಟೂರು | ನೀಲಗಿರಿ |

ಪಿ.ಆರ್. 692 ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಗ, ತುಮಕೂರು

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

## ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಮಂಗಳೂರು ವಿಭಾಗ, ಮಂಗಳೂರು

### ಸಮಯಾವಧಿ ವಿಸ್ತರಣೆ ಸಂಖ್ಯೆ:ಲೋ.ಇ:ಮಂವಿ:ಟಿ.ಎನ್.ಡಿ(6ಇ):2009–10:ಎಇ1, ದಿನಾಂಕ: 22ನೇ ಆಗಸ್ಟ್ 2009

ದಿನಾಂಕ:31.7.2009ರ 'ಸಂಯುಕ್ತ ಕರ್ನಾಟಕ' ಮತ್ತು 'ದಿ ಟೈಮ್ಸ್ ಆಫ್ ಇಂಡಿಯ' ದಿನಪತ್ರಿಕೆಗಳಲ್ಲಿ ಪ್ರಕಟವಾದ ಈ ಕಛೇರಿಯ ಟೆಂಡರ್ ನೋಟಿಫಿಕೇಶನ್ ನಂ: ಲೋ.ಇ:ಮಂ.ವಿ:ಟಿ.ಎನ್.ಡಿ(6ಇ):2009–10:ಎಇ1 ದಿನಾಂಕ:27.7.2009ರ ಪ್ರಕಟಣೆಗಳಲ್ಲಿ ಸೂಚಿಸಲಾದ ಸುವರ್ಣ ರಸ್ತೆ ಅಭಿವೃದ್ಧಿ ಯೋಜನೆಯಡಿಯಲ್ಲಿ ಕರೆಯಲಾದ ಕ್ರಮ ಸಂಖ್ಯೆ 1 ರಿಂದ 7 ಕಾಮಗಾರಿಗಳ ಟೆಂಡರ್‌ನ ಸಮಯಾವಧಿ ವಿಸ್ತರಣೆಯನ್ನು ಈ ಕೆಳಗಿನಂತೆ ಪರಿಷ್ಕರಿಸಲಾಗಿದೆ

1. ವೆಬ್‌ಸೈಟ್ ಮುಖಾಂತರ ಟೆಂಡರು ಡಾಕ್ಯುಮೆಂಟ್‌ಗಳನ್ನು ದಿನಾಂಕ: 15.09.2009 ರಿಂದ ಪಡೆಯಬಹುದಾಗಿರುತ್ತದೆ. (Download)
2. ಟೆಂಡರುಗಳನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಆನ್‌ಲೈನ್‌ನಲ್ಲಿ ಸಲ್ಲಿಸುವ ಕೊನೆಯ ದಿನಾಂಕ: 23.9.2009 ಅಪರಾಹ್ನ 4.00 ಗಂಟೆ (16.00 ಗಂಟೆ)

ಮೇಲಿನ ಬದಲಾವಣೆಗಳನ್ನು ಹೊರತುಪಡಿಸಿ ಇನ್ನಾವುದೇ ಬದಲಾವಣೆ ಇರುವುದಿಲ್ಲ.

ಕಾರ್ಯನಿರ್ವಾಹಕ ಇಂಜಿನಿಯರ್
ಪಿ.ಆರ್. 699 ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ಉಪನಿರ್ದೇಶಕರ ಕಛೇರಿ, ಶಿವಮೊಗ್ಗ

### ಟೆಂಡರ್ ಹರಾಜು ಪ್ರಕಟಣೆ ಸಂ. ತೋಉನಿ/ಶಿ/ತಾಸ1/23/2009–10, ದಿನಾಂಕ: 4ನೇ ಆಗಸ್ಟ್ 2009

ತೋಟಗಾರಿಕೆ ಉಪ ನಿರ್ದೇಶಕರು, ಗಾಂಧಿ ಪಾರ್ಕ್, ಶಿವಮೊಗ್ಗ ರವರ ಅಧೀನದಲ್ಲಿ ಬರುವ ಜಿಲ್ಲೆಯ ತೋಟಗಾರಿಕೆ ಕ್ಷೇತ್ರ/ನರ್ಸರಿಯಲ್ಲಿನ ವಿವಿಧ ಫಸಲುಗಳನ್ನು ಟೆಂಡರ್/ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲು ಈ ಕೆಳಕಂಡಂತೆ ದಿನಾಂಕಗಳನ್ನು ನಿಗದಿಪಡಿಸಲಾಗಿದೆ.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ/ನರ್ಸರಿಯ ಹೆಸರು | ಫಸಲಿನ | | ಟೆಂಡರ್ ಫಾರಂ ಪಡೆಯುವ ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ತೆರೆಯುವ ದಿನಾಂಕ/ ವೇಳೆ | ಟೆಂಡರ್ ತೆರೆಯುವ ಸ್ಥಳ ಮತ್ತು ಇಎಂಡಿ ಹಾಗೂ ಟೆಂಡರ್ ಮೊತ್ತ ಕಟ್ಟುವ ಸ್ಥಳ | ಇ.ಎಂ.ಡಿ. ಮೊತ್ತ | ಟೆಂಡರ್/ ಹರಾಜು |
|---|---|---|---|---|---|---|---|---|---|
| | | ಹೆಸರು | ಅವಧಿ | | | | | | |
| 1 | 2 | 3 | 4 | 5 | 6 | 7 | 8 | 9 | 10 |
| 1 | ಕಛೇರಿ ಸಸ್ಯಾಗಾರ ಭದ್ರಾವತಿ | ಸಪೋಟ | 1.7.09 ರಿಂದ 31.12.09 | 8.9.2009 5.00 PM | 9.9.2009 11.30 AM | 9.9.2009 12.30 PM | ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, ಭದ್ರಾವತಿ | 500/– | ಟೆಂಡರ್/ ಹರಾಜು |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 2 | ಗಂಗನಕೊಪ್ಪ ತೋಟಗಾರಿಕೆ ಕ್ಷೇತ್ರ, ಹೊಸನಗರ | ಸಪೋಟ | 1.7.09 ರಿಂದ 31.12.09 | 7.9.09 5.00 PM | 8.9.09 11.30 PM | 8.9.09 12.30 PM | ಸಹಾಯಕ ತೋಟಗಾರಿಕೆ ನಿರ್ದೇಶಕರು, ಹೊಸನಗರ | 1000/– | ಟೆಂಡರ್/ ಹರಾಜು |
| 3 | ಕುಶಾವತಿ ತೋಟಗಾರಿಕೆ ಕ್ಷೇತ್ರ, ತೀರ್ಥಹಳ್ಳಿ | ಸಪೋಟ | 1.7.09 ರಿಂದ 31.12.09 | 3.9.09 5.00 PM | 4.9.09 11.30 PM | 4.9.09 12.30 PM | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ತೀರ್ಥಹಳ್ಳಿ | 1000/– | ಟೆಂಡರ್/ ಹರಾಜು |

**ಟೆಂಡರ್–ಯಾ–ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಪಾಲಿಸಬೇಕಾದ ನಿಯಮ (ಷರತ್ತು)ಗಳು:**

1. ಕ್ಷೇತ್ರಗಳ ತೆಂಗು ಫಸಲನ್ನು ಟೆಂಡರ್ / ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.
2. ಫಸಲಿನ ಟೆಂಡರ್‌ನಲ್ಲಿ ಭಾಗವಹಿಸಲು ಇಷ್ಟವುಳ್ಳವರು ಕಛೇರಿ ವೇಳೆಯಲ್ಲಿ ನಿಗದಿತ ಟೆಂಡರ್ ಫಾರಂನ್ನು ರೂ. 25/– (ರೂ.ಇಪ್ಪತ್ತೈದು) ಗಳನ್ನು ಪಾವತಿ ಮಾಡಿ ಪಡೆಯಬಹುದಾಗಿದೆ. ನಿಗದಿತ ಟೆಂಡರ್ ಫಾರಂನಲ್ಲಿ ಮಾತ್ರ ಟೆಂಡರ್ ಸಲ್ಲಿಸಬೇಕು.
3. ಟೆಂಡರ್ ಫಾರಂನ್ನು ಭರ್ತಿ ಮಾಡಿ ಇ.ಎಂ.ಡಿ. ಮೊತ್ತ ಮತ್ತು ಟೆಂಡರ್ ಮೊತ್ತದ ಶೇ. 50 ರಷ್ಟು ಹಣವನ್ನು ಪ್ರತ್ಯೇಕ ಕ್ರಾಸ್ ಡಿ.ಡಿ.ಯೊಂದಿಗೆ ಲಗತ್ತಿಸಿ ಸೀಲು ಮಾಡಿದ ಲಕೋಟೆಯಲ್ಲಿ ಸಲ್ಲಿಸಬೇಕು.
4. ಇ.ಎಂ.ಡಿ. ಹಣ ಮತ್ತು ಶೇ. 50ರ ಹಣದ ಕ್ರಾಸ್ ಡಿ.ಡಿ.ಯನ್ನು ಕ್ಷೇತ್ರದ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು/ಸಹಾಯಕ ತೋಟಗಾರಿಕೆ ನಿರ್ದೇಶಕರು ಪದನಾಮದಲ್ಲಿ ತೆಗೆಯಬೇಕು.
5. ಟೆಂಡರ್ ಫಾರಂನಲ್ಲಿ ಪೂರ್ಣ ಹೆಸರು, ವಿಳಾಸ, ಟೆಂಡರ್ ಮೊತ್ತ (ಅಂಕಿಗಳಲ್ಲಿ ಮತ್ತು ಅಕ್ಷರಗಳಲ್ಲಿ ಪ್ರತ್ಯೇಕವಾಗಿ) ಇತ್ಯಾದಿಗಳನ್ನು ಸಂಪೂರ್ಣವಾಗಿ ದಾಖಲಿಸಿ ಸಹಿ ಮಾಡಿರಬೇಕು. ಅಪೂರ್ಣ ಹಾಗೂ ಲೋಪದೋಷಿತ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
6. ಯಶಸ್ವಿ ಬಿಡ್ಡುದಾರರು ಇಲಾಖೆಯೊಂದಿಗೆ ಇಲಾಖೆಯ ನಿಯಮಗಳನ್ನೊಳಗೊಂಡ ಕರಾರು ಪತ್ರವನ್ನು ಸಹಿ ಹಾಕಿ ಕರಾರು ಮಾಡಿಕೊಳ್ಳಬೇಕು ಮತ್ತು ಅದಕ್ಕೆ ಬದ್ದರಾಗಿರಬೇಕು.
7. ಮೇಲಾಧಿಕಾರಿಗಳಿಂದ ಅನುಮೋದನೆ ಬಂದ ನಂತರ 10 ದಿನದೊಳಗಾಗಿ ಉಳಿದ ಶೇ. 50 ರ ಮೊತ್ತವನ್ನು ಕ್ರಾಸ್ ಡಿ.ಡಿ. ಮೂಲಕ ಪಾವತಿಸಬೇಕು.
8. ಫಸಲಿನ ಕಾವಲು ಕಟ್ಟಳೆಗಳನ್ನು ಸಫಲ ಟೆಂಡರ್‌ದಾರರೆ ನೋಡಿಕೊಳ್ಳತಕ್ಕದ್ದು.
9. ಫಸಲನ್ನು ಕಟಾವು ಮಾಡಿಕೊಳ್ಳುವ ಅವಧಿಗೆ ಕಟಾವು ಸೀಮಿತಗೊಳಿಸಬೇಕು. ಬಲಿತ ಕಾಯಿಗಳನ್ನು ಮಾತ್ರ ಕೊಯಿಲು ಮಾಡಲು ಅವಕಾಶವಿರುತ್ತದೆ.
10. ಫಸಲು ಯಾವುದೇ ಪ್ರಕೃತಿ ವಿಕೋಪಕ್ಕೆ ಹಾನಿಯಾದರೆ ಇಲಾಖೆಯು ಜವಾಬ್ದಾರಿಯಲ್ಲ. ಹಾಗೂ ಯಾವುದೇ ಪರಿಸ್ಥಿತಿಯಲ್ಲಿ ಹಣ ಹಿಂದಿರುಗಿಸಲಾಗುವುದಿಲ್ಲ.
11. ಫಸಲು ವೀಕ್ಷಿಸಲು ಇಷ್ಟವುಳ್ಳವರು ಕಛೇರಿಯ ವೇಳೆಯಲ್ಲಿ ಸಂಬಂಧಿಸಿದ ಕ್ಷೇತ್ರದ ಅಧಿಕಾರಿಗಳನ್ನು ಕಂಡು ಮಾಹಿತಿ ಪಡೆಯಬಹುದು.
12. ಟೆಂಡರ್‌ದಾರರು ಇಲಾಖೆಯ ಎಲ್ಲಾ ನಿಬಂಧನೆಗಳಿಗೆ ಬದ್ದರಾಗಿರಬೇಕು, ಒಂದು ವೇಳೆ ಯಾವುದೇ ನಿಯಮ ಉಲ್ಲಂಘಿಸಿದರೆ ಠೇವಣಿ ಹಣ ಮತ್ತು ಶೇ. 50 ರ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಳ್ಳಲಾಗುವುದು.
13. ಫಸಲಿಗೆ ಯೋಗ್ಯ ಬೆಲೆ ಬಾರದಿದ್ದಲ್ಲಿ ಕಟಾವಿಗೆ ಅನುಮತಿ ನೀಡುವುದು/ತಿರಸ್ಕರಿಸುವುದು ಇಲಾಖೆಯ ಸಕ್ಷಮ ಪ್ರಾಧಿಕಾರಕ್ಕೆ ಸೇರಿರುತ್ತದೆ.
14. ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆವುಳ್ಳವರು ಇಲಾಖಾ ಕಚೇರಿಗಳಿಗೆ ಭೇಟಿ ಮಾಡಿ ಸಂಪೂರ್ಣ ಮಾಹಿತಿ ಪಡೆದುಕೊಳ್ಳಬೇಕು.
15. ಹೆಚ್ಚಿನ ಮಾಹಿತಿಗಾಗಿ ಕಛೇರಿ ಅಧಿಕಾರಿಗಳನ್ನು ಭೇಟಿಯಾಗುವುದು.

ಪಿ.ಆರ್. 667 ತೋಟಗಾರಿಕೆ ಉಪ ನಿರ್ದೇಶಕರು, ಗಾಂಧಿ ಪಾರ್ಕ್, ಶಿವಮೊಗ್ಗ.

**ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ,**
**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**
**ಅಲ್ಪಾವಧಿ ಐಟಂವಾರು ಟೆಂಡರು ಅಧಿಸೂಚನೆ ಸಂ. 04:2009–10:ದಿ:26–05–2009ಕ್ಕೆ**
**ತಿದ್ದುಪಡಿ ಮತ್ತು ಅವಧಿ ವಿಸ್ತರಣೆ**

ಕರ್ನಾಟಕ ರಾಜ್ಯಪಾಲರ ಪರವಾಗಿ ಮೈಸೂರು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ವಿಭಾಗದ ಕಾರ್ಯಪಾಲಕ ಇಂಜಿನಿಯರ್‌ರವರಿಂದ ಮೈಸೂರು ಜಿಲ್ಲೆ ತಿ.ನರಸೀಪುರ ತಾಲ್ಲೂಕು ಶಿರಾ–ನಂಜನಗೂಡು ರಸ್ತೆ ಸರಪಳಿ (ರಾಜ್ಯ ಹೆದ್ದಾರಿ – 84) ಸರಪಳಿ 213.15 ರಿಂದ 241.17 ರವರೆಗೆ ಅಭಿವೃದ್ಧಿ ಕಾಮಗಾರಿಯ ಟೆಂಡರ್‌ನ್ನು ಇ–ಪ್ರೊಕ್ಯೂರ್‌ಮೆಂಟ್ ನಲ್ಲಿ ಡೌನ್ ಲೋಡ್ ಮಾಡಿಕೊಂಡು (viz https://eproc.karnataka.gov.in) ಟೆಂಡರ್ ಸಲ್ಲಿಸಲು ಈ ಕೆಳಕಂಡಂತೆ ದಿನಾಂಕಗಳನ್ನು ನಿಗದಿಪಡಿಸಲಾಗಿದೆ.

| ಕ್ರಮ. ಸಂಖ್ಯೆ | ಹಿಂದೆ ಇ–ಪ್ರೊಕ್ಯೂರ್‌ಮೆಂಟ್ ನಲ್ಲಿ ಡೌನ್ ಲೋಡ್ ಮಾಡಿಕೊಂಡು ಟೆಂಡರ್ ಸಲ್ಲಿಸಲು ನಿಗಧಿಪಡಿಸಿದ ದಿನಾಂಕ | ಈಗ ತಿದ್ದುಪಡಿ ಮಾಡಿ ಇ–ಪ್ರೊಕ್ಯೂರ್‌ಮೆಂಟ್ ನಲ್ಲಿ ಡೌನ್ ಲೋಡ್ ಮಾಡಿಕೊಂಡು ಟೆಂಡರ್ ಸಲ್ಲಿಸಲು ನಿಗದಿಪಡಿಸಿದ ದಿನಾಂಕ |
|---|---|---|
| 1 | 10–06–09 ರಿಂದ 15–06–09 ಸಂಜೆ 4.00 ಘಂಟೆವರೆಗೆ | 24–08–09 ರಿಂದ 04–09–2009 ಸಂಜೆ 4.00 ಘಂಟೆವರೆಗೆ |

ಹೆಚ್ಚಿನ ವಿವರಗಳಿಗೆ ಈ ಕೆಳಗೆ ಸಹಿ ಮಾಡಿರುವ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿರುತ್ತದೆ.

ಕಾರ್ಯಪಾಲಕ ಇಂಜಿನಿಯರ್, ಲೋ. ಬಂ. ಮತ್ತು ಒ. ಜ. ಸಾರಿಗೆ ಇಲಾಖೆ, ಮೈಸೂರು ವಿಭಾಗ, ಮೈಸೂರು.

**PUBLIC WORKS, PORTS & INLAND WATER TRANSPORT DEPARTMENT**

**Extention of Time for Short-term Tender.**

**No. EE/ PWD, Mysore Division, Mysore IFT No. 04/ 2009-10 Dt. 22nd August 2009**

1. The Executive Engineer Public works, Ports & Inland Water Transport Department Mysore Division invites tenders from eligible tenderers in **TWO COVER SYSTEM** for the road works detailed in the table through e-procurement portal of the Government of Karnataka **(viz http://eproc.karnataka.gov.in)** The tenderers are advised to note the minimum qualification criteria specified in clause-3 of the Instructions to Tenderers to qualify for award of the contract.
2. Tender documents may be downloaded from the e-procurement portal of the Government of Karnataka from **24-08-09 to 04-09-09**
3. Tenders must be accompanied by earnest money deposit specified for the work in the table below. Earnest money deposit will have to be in any one of the forms as per the instructions in the e-procurement portal and shall have to be valid for **45 days** beyond the validity of the tender.
4. Tenders must be submitted online through e-procurement portal on or before **16.00 hours** on **04-09-09** and the opening of the tenders will be as per the e-procurement portal guidelines.
5. Other details and conditions can be seen in the tender documents.

**TABLE**

| Sl. No. | Name of the Work | Form No. | Approximate value of work (Rs. in lakhs) | Earnest money deposit (Rs. in lakhs) | Cost of document (Rs.) | Period of completion including rainy season | Contractor eligibility |
|---|---|---|---|---|---|---|---|
| 1 | IMPROVEMENTS TO SIRA-NANJANGUD ROAD SH-84 FROM KM 213.15 TO 241.17 IN T.NARASIPURA TALUK MYSORE DISTRICT. | K/W-4 | 171.28 | 2.57 | 5000.00 | 4 Months (Including rainy season) | Class-1 |

Executive Engineer

P.R. 700 P.W.P. & I.W.T. Department, Mysore Division, Mysore.

**ಅರಣ್ಯ ಇಲಾಖೆ**

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ, ಬೆಂಗಳೂರು – 83**

**ಸಂಕ್ಷಿಪ್ತ ಹರಾಜು ಪ್ರಕಟಣೆ ಸಂಖ್ಯೆ:ಎ4/ಬರಾಉ/ವಾಹನ(ಹ)–1709–10, ದಿನಾಂಕ: 6ನೇ ಆಗಸ್ಟ್ 2009**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದಲ್ಲಿ ನಿರುಪಯುಕ್ತಗೊಳಿಸಿರುವ ಈ ಕೆಳಗೆ ನಮೂದಿಸಿರುವ ಸರ್ಕಾರಿ ವಾಹನವನ್ನು ದಿನಾಂಕ: 04.09.2009 ರಂದು ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದ ಕಛೇರಿ ಆವರಣದಲ್ಲಿ ವಾಹನಗಳ ಯಥಾಸ್ಥಿತಿಯಲ್ಲಿ ಬೆಳಿಗ್ಗೆ 11.00 ಗಂಟೆಗೆ ಬಹಿರಂಗವಾಗಿ ಹರಾಜು ಮಾಡಲಾಗುವುದು.

| ಕ್ರಮ ಸಂಖ್ಯೆ | ವಾಹನದ ವಿವರ |
|---|---|
| 1. | ಕೆಎ–01–ಜಿ–929 ಮಾರುತಿ ಜಿಪ್ಸಿ (ಪೆಟ್ರೋಲ್) |

**ಷರತ್ತುಗಳು:**

1. ಹರಾಜಿನಲ್ಲಿ ಭಾಗವಹಿಸಲು ಇಚ್ಚೆವುಳ್ಳವರು ಪ್ರತಿ ವಾಹನಕ್ಕೆ ರೂ. 5000/– ಗಳ ಮುಂಗಡ ಹಣವನ್ನು ಡಿಪಾಜಿಟ್ ಮಾಡತಕ್ಕದ್ದು.
2. ಅತಿ ಹೆಚ್ಚಿನ ಬಿಡ್ಡುದಾರರು ಹರಾಜಿನಲ್ಲಿ ಪಡೆದ ಪೂರ್ತಿ ಹಣವನ್ನು ತೆರಿಗೆಗಳೊಂದಿಗೆ ಹರಾಜು ಮುಗಿದ ತಕ್ಷಣ ಪಾವತಿಸತಕ್ಕದ್ದು.
3. ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,

ಪಿ.ಆರ್. 702 ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ, ಬೆಂಗಳೂರು.